# ನಮ್ಮ ಕುಲದೈವ "ಚಿಂತಲವಾಡಿ ನರಸಿಂಹ" ದೇವರ ಸ್ಮರಣೆಯೊಂದಿಗೆ



ಶ್ರೀ ಭೋಗಾ ನರಸಿಂಹದೇವರು



ಶ್ರೀಯೋಗಾ ನರಸಿಂಹದೇವರು



ಷೋಡಶಬಾಹು ನರಸಿಂಹದೇವರು



ಭೀಮಸೇನ ಕರಾರ್ಚಿತ ಸೋಂದಾ ಲಕ್ಷ್ಮೀ ನರಸಿಂಹದೇವರು

## "ಶ್ರೀ ನರಸಿಂಹ ಜಯಂತಿ" ಪ್ರಯುಕ್ತ

## 07.05.2009ರಂದು ಪ್ರಕಟಣೆ

## ಪ್ರಕಾಶನ– ಮಾ।ಶಾ।ಸಂ। ಶ್ರೀ S.N. ರಾಮಚಂದ್ರಾಚಾರ್

## ದೇವರನಾಮಗಳ ಸಂಗ್ರಹ – ನರಹರಿಸುಮಧ್ವ

==================================

ರಾಘವೇಂದ್ರಸ್ವಾಮಿಗಳ ಮಠ, ರಾಯರ ಮಠದ ರಸ್ತೆ,

ಮೊದಲನೇ ಮುಖ್ಯರಸ್ತೆ, ಶಾಕಾಂಬರಿ ನಗರ, ಬೆಂಗಳೂರು – 560070

- **ಭರ್ಜನಂ ಭವ ಬೀಜಾನಾಂ ಆರ್ಜನಂ ಕುಲಸಂಪದಾಂ**
  **ತ್ರಾಸನಂ ಯಮದೂತಾನಾಂ ನೃಹರೇರ್ನಾಮ ಗರ್ಜನಂ**
  (ನರಸಿಂಹರೂಪೀ ಭಗವಂತನ ನಾಮದ ಉಚ್ಚಾರಣೆ ನಮ್ಮ ಸಂಸಾರವನ್ನು ಬೇರು ಸಹಿತ ಉಚ್ಚಾಟಿಸುವುದು. ಸಂಪತ್ತನ್ನು ನೀಡುವುದು. ಯಮದೂತರನ್ನು ನಡುಗಿಸುವುದು)

**ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋ ಮುಖಂ ।**
**ನೃಸಿಂಹಂ ಭೀಷಣಂ ಭದ್ರಂ ಮೃತ್ಯುರ್ ಮೃತ್ಯುಂ ನಮಾಮ್ಯಹಂ ॥**
(ಉಗ್ರರೂಪಿಯೂ, ವೀರನೂ, ಎಲ್ಲ ದಿಕ್ಕುಗಳಲ್ಲೂ ಬೆಂಕಿಯಂತೆ ಜ್ವಲಿಸುತ್ತಿರುವವನೂ, ಮಂಗಳಕರನೂ, ನರ ಮತ್ತು ಸಿಂಹದ ಸಮ್ಮೇಳವಾಗಿರುವ ರೂಪಿಯೂ, ಮೃತ್ಯುವಿಗೇ ಮೃತ್ಯುವೂ ಆದ ಶ್ರೀ ನರಸಿಂಹದೇವರಿಗೆ ನಮಸ್ಕಾರ)

---

- **ರಾಗ : ಶಂಕರಾಭರಣ ತಾಳ – ಅಟ್ಟತಾಳ**

ನರಸಿಂಹ ಪಾಹಿ ಲಕ್ಷ್ಮೀ ನರಸಿಂಹ । ಪ ।

ನರಸಿಂಹ ನಮಿಪೆ ನಾ ನಿನ್ನ । ಚಾರುಚರಣಕಮಲಕೆ ನೀ ಎನ್ನ ।
ಕರವ ಪಿಡಿದು ನಿಜ ಶರಣನೆಂದೆನಿಸು ।
ಭಾಸುರ ಕರುಣಾಂಬುಧೆ ಗರುಡವಾಹನ – ಲಕ್ಷ್ಮೀ । ಅ ।

ತರಳ ಪ್ರಹ್ಲಾದನ ನುಡಿಯ ಕೇಳಿ ।
ತ್ವರಿತದಿ ಬಂದ್ಯೋ ಎನ್ನೊಡೆಯ ನಾನು
ಕರುಣಾಳೊ ಭಕ್ತರ ಭಿಡೆಯ ಮೀರಲರಿಯೆ।
ಎಂದೆಂದು ಕೆಂಗಿಡಿಯ ಅಹ–

ಭರದಿಂದುಗುಳುತ ಬೊಬ್ಬಿರುದಿ ಬೆಂಬತ್ತಿ
ಕರ್ಬುರಕಶ್ಯಪುವಿನ ಹಿಂಗರುಳ ಪಿಡಿದ ಲಕ್ಷ್ಮೀ ।1।

ಪ್ರಳಯಾಂಬುನಿಧಿಘನಘೋಷದಂತೆ
ಘುಳುಘುಳಿಸುತಲಿ ಪ್ರದೋಷ ಕಾಲ
ತಿಳಿದು ದೈತ್ಯನ ಅತಿರೋಷದಿಂದ ಅಪ್ಪಳಿಸಿ
ಮೇದಿನಿಗೆ ನಿರ್ದೋಷ – ಅಹ
ಸೆಳೆಸೆಳೆಯುತ ಚರ್ಮಸುಲಿದು ಕೆನ್ನೆತ್ತರೋ–
ಕುಳಿಯಾಡಿದೆ ದಿಶಾವಳಿಗಳೊಳಗೆ – ಲಕ್ಷ್ಮೀ ।2।

ಕ್ರೂರದೈತ್ಯನ ದೋರೆಗರುಳ ತೆಗೆಧ್ವಾರ
ಮಾಡಿದೆ ನಿಜಕೊರಳ ಕಂಡು
ವಾರಿಜಾಸನ ಮುಖ್ಯರರಳ – ಪುಷ್ಪ
ಸಾರಗರೆದು ವೇಗ ತರಳ – ಅಹ
ಧೀರಪ್ರಹ್ಲಾದನ ತೋರಿತ್ವದಂಘ್ರಿ
ಸರೋರುಹವನು ಸಾರ್ದರೋ ಕಾರುಣ್ಯನಿಧೆ – ಲಕ್ಷ್ಮೀ ।3।

ಜಯಜಯ ದೇವವರೇಣ್ಯ ಮಹದ್ಭಯ
ನಿವಾರಣನೆ ಅಗಣ್ಯ ಗುಣಾಶ್ರಯ ಘೋರ
ದುರಿತಾರಣ್ಯ ಧನಂಜಯ ಜಗದೇಕಶರಣ್ಯ – ಅಹ
ಲಯವಿವರ್ಜಿತ ಲೋಕತ್ರಯವ್ಯಾಪ್ತ
ನಿಜಭಕ್ತಪ್ರಿಯ ಘೋರಾಮಯಹರ ದಯಮಾಡು – ಲಕ್ಷ್ಮೀ ।4।

ಕುಟಿಲದವೇಷದವ ನೀನಲ್ಲ ನಿನ್ನಾರ್ಭಟಕಂಜಿದರು ಸುರರೆಲ್ಲ

ನರನಟನೆ ತೋರಿದ್ಯೋ ಲಕ್ಷ್ಮೀನಲ್ಲ
ನಾಪಾಸಟಿ ಕಾಣೆನಪ್ರತಿಮಲ್ಲ – ಅಹ
ವಟಪತ್ರಶಯನ ಧೂರ್ಜಟಿವಂದ್ಯ
ಜಗನ್ನಾಥವಿಠಲ ಕೃತಾಂಜಲಿಪುಟದಿ ಬೇಡುವೆ – ಲಕ್ಷ್ಮೀ । 5 ।

---

**ರಾಗ : ಸಾವೇರಿ      ತಾಳ : ಆದಿತಾಳ**

ನಮೋ ನಮಸ್ತೇ ನರಸಿಂಹ ದೇವಾ – ಸ್ಮರಿಸುವವರ ಕಾವ
ಸುಮಹಾತ್ಮ ನಿನಗೆಣೆ ಲೋಕದೊಳಗಾವ ತ್ರಿಭುವನ ಸಂಜೀವಾ
ಉಮೆಯರಸ ಹೃತ್ಕಮಲದ್ಯುಮಣಿ
ಮಾ ರಮಣ ಕನಕ ಸಂಯಮಿವರವರದಾ । ಪ ।

ಕ್ಷೇತ್ರಜ್ಞ ಕ್ಷೇಮಧಾಮಭೂಮಾ ದಾನವಕುಲಭೀಮ
ಗಾತ್ರಸನ್ನುತ ಬ್ರಹ್ಮಾದಿ ಸ್ತೋಮ
ಸನ್ಮಂಗಳನಾಮ ಚಿತ್ರಮಹಿಮನಕ್ಷತ್ರನೇಮಿ
ಸರ್ವತ್ರ ಮಿತ್ರ ಸುಚರಿತ್ರ ಪವಿತ್ರ । 1 ।

ಅಪರಾಜಿತ ಅನಘ ಅನಿರ್ವಿಣ್ಣ ಲೋಕೈಕಶರಣ್ಯ
ಶಫರಕೇತುಕೋಟಿಲಾವಣ್ಯ ದೈತ್ಯೇಂದ್ರ ಹಿರಣ್ಯಕ
ಶಿಪುತನಯನ ಕಾಯ್ದೆಪೆನೆನುತಲಿ
ನಿಷ್ಕಪಟ ಮನುಜಹರಿವಪುಷ ನೀನಾದೆ । 2 ।

ತಪನಕೋಟಿ ಪ್ರಭಾ ಶರೀರ – ದುರಿತೌಘವಿದೂರ
ಪ್ರಪಿತಾಮಹಮಂದಾರ – ಖಳವಿಪಿನಕುಠಾರ

ಕೃಪಣಬಂದು ತವ ನಿಪುಣತನಕೆ
ನಾನುಪಮೆಗಾಣೆ ಕಾಶ್ಯಪಿವರವಹನಾ ।3।

ವೇದವೇದಾಂಗವೇದ್ಯ – ಸಾಧ್ಯ ಅಸಾಧ್ಯ
ಶ್ರೀದ ಮುಕ್ತಾಮುಕ್ತಾರಾಧ್ಯ – ಅನುಪಮ ಅನವದ್ಯ
ಮೋದಮಯನೆ ಪ್ರಹ್ಲಾದವರದ
ನಿತ್ಯೋದಯ ಮಂಗಳ ಪಾದಕಮಲಕೆ ।4।

ಅನಿಮಿತ್ತ ಬಂಧು ಜಗನ್ನಾಥ ವಿಠಲ ಸಾಂಪ್ರತ
ನಿನಗೆ ಬಿನ್ನೈಪೆ ಎನ್ನಯ ಮಾತ ಲಾಲಿಸುವದು ತಾತ
ಗಣನೆಯಿಲ್ಲದವಗುಣವೆನಿಸಿದೆ ಪ್ರತಿ–
ಕ್ಷಣಕೆ ಕಥಾಮೃತ ಉಣಿಸು ಕರುಣದಿ ।5।

---------------------------------------

**ರಾಗ – ಬಿಲಹರಿ ತಾಳ – ಆಟತಾಳ**

ನರಸಿಂಹಮಂತ್ರ ಒಂದಿರಲು ಸಾಕು
ದುರಿತಕೋಟಿಗಳ ಸಂಹರಿಸಿ ಭಾಗ್ಯವನೀವ । ಪ ।

ಹಸುಳೆ ಪ್ರಹ್ಲಾದನ ತಲೆಗಾಯ್ದದೀ ಮಂತ್ರ
ಅಸುರನೊಡಲ ಬಗೆದ ದಿವ್ಯ ಮಂತ್ರ
ವಸುಧೆಯೊಳು ದಾನವರ ಅಸುವ ಸೆಳೆವ ಮಂತ್ರ
ಪಶುಪತಿಗೆ ಪ್ರಿಯವಾದ ಮೂಲಮಂತ್ರ ।1।

ದಿಟ್ಟ ಧ್ರುವರಾಯಗೆ ಪಟ್ಟಗಟ್ಟಿದ ಮಂತ್ರ
ಸೃಷ್ಟಿಯೊಳು ವಿಭೀಷಣನ ಪೊರೆದ ಮಂತ್ರ
ತುಟ್ಟ ತುದಿಯೊಳು ಅಜಾಮಿಳನ ಸಲಹಿದ ಮಂತ್ರ
ಮುಟ್ಟಿ ಭಜಿಪರಿಗಿದು ದೃಷ್ಟಮಂತ್ರ । 2 ।

ಹಿಂಡುಭೂತವ ಕಡುದು ತುಂಡು ಮಾಡುವ ಮಂತ್ರ
ಕೊಂಡಾಡಿಲೋಕಕುದ್ದಂಡ ಮಂತ್ರ
ಗಂಡುಗಲಿ ಪ್ರಚಂಡ ಹಿಂಡು ದಾನವರುಗಳ
ಗಂಡ ಪುರಂದರವಿಠಲನ ಮಹಾಮಂತ್ರ । 3 ।

---

## ರಾ ಗ – ಮ ಧ್ಯ ಮಾ ವ ತಿ : ತಾ ಳ – ಅ ಟ ತಾ ಳ

ರುದ್ರಾಂತರ್ಗತ ನಾರಸಿಂಹ ಪಾಹಿ
ಭದ್ರಮೂರುತಿ ನಿರ್ಗತಾಂಹ್ವ । ಪ ।

ಹೃದ್ರೋಗಕಳೆದು ಜ್ಞಾನಾರ್ದ್ರಸ್ವಾಂತನ ಮಾಡು
ಪದ್ರಸಾಮಗಘ ಸಮುದ್ರ ದಾಟಿಸಿ ಬೇಗ । ಅ ಪ ।

ಏಸೇಸು ಕಲ್ಪಗಳಲ್ಲಿ ನಿನ್ನ ದಾಸನಾನೆಂಬುದ ಬಲ್ಲೆ
ಈಶ ನೀನೆಂಬುದು ಲೇಶವರಿಯೆ
ಕ್ಲೇಶನಾಶನ ಪ್ರಭುವೆ ವಾರಾರಿಜೆವಲ್ಲಭ
ವಾಸವಾನುಜ ವನಧಿಶಯನ ಮಹೇಶವಂದಿತವರದ
ಹೇ ಕರುಣಾ ಸಮುದ್ರ ಕರಾಳ
ವದನನೆ ನೀ ಸಲಹದಿರೆ ಕಾಣೆ ಕಾವರ । 1 ।

ಹೇಮಕಶ್ಯಪು ತನ್ನ ಸುತನ ನೋಯಿಸೆ
ಶ್ರೀಮನೋಹರನೆ ಆನತನ್ನ ವ್ಯೋಮ ಪರ್ವತ
ಅಂಬುಧಿಧಾಮದೊಳುಳುಹಿ ಭೂಮಮುನಿಗಣ
ಸ್ತೋಮವಂದಿತಪಾದ ಸಾಮಜೇಂದ್ರನ ಸರಸಿಯೊಳು
ಸುತ್ರಾಮನಂದನನಾ ರಣದಿ ಕುರು ಭೂಮಿಪತಿ
ಸಭೆಯೊಳಗೆ ದ್ರೌಪದಿಯ ಆ ಮಹಾತ್ಮರ ಕಾಯ್ದ ಕರುಣಿ । 2 ।

ವೇದಗಮ್ಯ ವೇದವ್ಯಾಸ ಕಪಿಲ ಯಾದವೇಶ ಮಹಿದಾಸ
ಶ್ರೀದ ಶ್ರೀಷ ಅನ್ನಾದಿ ವಿಶ್ವಧನ್ವಂತ್ರಿ
ಮೇಧಾವಿಪತಿ ವಾಮನಾದಿರೂಪಕ ವಿಷ್ಣು
ಕಾದುಕೊ ನೀನವರ ಮನದ ವಿಷಾದ
ರೋಗಂಗಳನು ಅಳಿದು ಮಹದಾದಿದೇವ
ಜಗನ್ನಾಥವಿಟ್ಠಲ ಆದರದಿ ಪ್ರಹ್ಲಾದ ವರದ । 3 ।

---

## ರಾಗ – ಹಂಸಧ್ವನಿ : ತಾಳ – ಆದಿತಾಳ

ನಾರಸಿಂಹ ಶ್ರೀ ನಾರಸಿಂಹ
ಪಾರುಗಾಣಿಸಿ ದುರಿತೌಘ ಹರಿಸಿ ಕಾಯೊ । ಪ ।
ನರಹರಿ ಜ್ವರಹರ ಘೋರವ್ಯಾಧಿಯ
ಪರಿಹಾರಗೈಸಿ ಪರಿಪಾಲಿಸಬೇಕಯ್ಯ ।ಅ ಪ ।

ಘುಡುಘುಡಿಸುತ ಪಲ್ಕಡಿದು ಚೆಂಡಾಡುತ
ಮೃಡನೆ ಪರನು ಎಂದು ನುಡಿದ ಕಶಿಪುವಿನ
ಒಡನೆ ಕಂಬದಿ ಬಂದು ಒಡಲ ಬಗೆದು ನಿನ್ನ

ದೃಢಭಕುತಗೆ ಬಂದೆಡರ ಬಿಡಿಸಿದೆ ।1।
ತುಷ್ಟಿ ಪಡಿಸೊ ಪರಮೇಷ್ಟಿಯಪಿತ ನಿನ್ನ
ದೃಷ್ಟಿಯಿಂದ ಅನಿಷ್ಟನಿವಾರಣ
ಅಷ್ಟಕರ್ತೃತ್ವದ ಪ್ರಭೋ ಕಷ್ಟ ಹರಿಸಿ ಭಕ್ತ
ರಿಷ್ಟಪಾಲಿಪ ಸರ್ವಸೃಷ್ಟಿಗೊಡೆಯ ದೇವ ।2।
ಸಂಕಟ ಬಿಡಿಸೊ ಭವಸಂಕಟದಿಂದ ಶ್ರೀ
ವೇಂಕಟೇಶಾತ್ಮಕ ಭೀಕರರೂಪ
ಶಂಕರಾಂತರ್ಗತ ಸಂಕುರುಷಣಮೂರ್ತೆ
ಮಂಕುಹರಿಸಿ ಪಾದಪಂಕಜ ತೋರಯ್ಯ ।3।

---

## ರಾಗ – ಮುಖಾರಿ : ತಾಳ – ಆದಿತಾಳ

ಕಾಯೋ ಶ್ರೀ ನಾರಸಿಂಹ – ಕಾಯೋ ಜಯ ನಾರಸಿಂಹ ।ಪ।
ಕಾಯೋ ಶ್ರೀ ನಾರಸಿಂಹ ತ್ರಿಯಂಬಕಾದ್ಯಮರೇಶ
ಭಯಾಂಧತಿಮಿರಮಾರ್ತಾಂಡ ಶ್ರೀನಾರಸಿಂಹ ।ಅ ಪ।
ಘೋರ ಅಕಾಲಮೃತ್ಯು ಮೀರಿ ಬರಲು ಕಂಡು
ಧೀರ ನಿ ಬಿಡಿಸದಿನ್ಯಾರೊ ಶ್ರೀ ನಾರಸಿಂಹ ।೧।
ಧೀಷಣನೆ ಸುಭದ್ರ ದೋಷ ಮೃತ್ಯುಗೆ ಮೃತ್ಯು
ಸುಷಮ್ನಾನಾಡಿಸ್ಥಿತವಿಭುವೆ ಶ್ರೀನಾರಸಿಂಹ ।೨।
ಜ್ಞಾನರಹಿತನಾಗಿ ನಾ ನಿನ್ನ ಮರೆತರೆ
ನೀನೂ ಮರೆತದ್ಯಾಕೆ ಪೇಳೊ ಶ್ರೀನಾರಸಿಂಹ ।೩।
ಪ್ರಬಲೋತ್ತಮನೆನಿಸಿ ಅಬಲರ ಕಾಯದಿರೆ
ಸುಬಲರು ಕಂಡು ಮೆಚ್ಚುವರೆ ಶ್ರೀನಾರಸಿಂಹ ।೪।
ಪಾಲಮುನ್ನೀರಾಗರ ಪದುಮಮನೋಹರ
**ಗೋಪಾಲವಿಟ್ಠಲ** ಜಗತ್ಪಾಲ ಶ್ರೀನಾರಸಿಂಹ ।೫।

## ನಾರಸಿಂಹನೆಂಬೊ ದೇವನು

ನಾರಸಿಂಹನೆಂಬೊ ದೇವನು ನಾರಸಿಂಹನೆಂಬೊ ದೇವನು ।
ನಂಬಿದಂಥ ನರರಿಗೆಲ್ಲ ವರವಕೊಡುವನು । ಪ ।

ಆದಿಯಲ್ಲಿ ಲಕ್ಷ್ಮಿಸಹಿತದಿ ಮಲಗಿರಲು । ಬಂದರಾಗ ಸನತ್
ಕುಮಾರರು ।
ಆಗ ದ್ವಾರಪಾಲಕರು ತಡೆಯಲಾಗ ಕೋಪದಿಂದ ।
ಮೂರು ಜನ್ಮದಲ್ಲಿ ನೀವು ಅಸುರರಾಗಿ ಪುಟ್ಟಿರೆಂದರು ।ನಾರಸಿಂಹ॥೧॥

ದಿತಿಯ ಗರ್ಭದಲ್ಲಿ ಜನಿಸಿದ ಹಿರಣ್ಯಾಕ್ಷ ಹಿರಣ್ಯಕಶಿಪುರೆಂಬ ಭ್ರಾತೃರು ।
ಪೃಥ್ವಿಯನ್ನು ಮುಳುಗಿಸಿದ ಕಾರಣಾದಿ ಶ್ರೀಹರಿಯು ।
ತೃತೀಯ ರೂಪದಿಂದ ಖಳನ ಕೊಂದು ಧರೆಯನುಳಿಹಿದನು।ನಾರಸಿಂಹ ॥೨॥

ಅನುಜನಾದ ಹಿರಣ್ಯಾಕ್ಷನ ಮರಣವನ್ನು ಕೇಳಿ ಆಗ ನಡೆದ ತಪಸ್ಸಿಗೆ ।
ಹರಿಯ ಮೇಲೆ ಸಿಟ್ಟಿನಿಂದ ಉಗ್ರತಪಸ್ಸನ್ನು ಮಾಡಿ ।
ಬ್ರಹ್ಮನಿಂದ ವರಗಳನ್ನು ಪಡೆದುಕೊಂಡು ಬಂದನಾಗ । ನಾರಸಿಂಹ ॥ ೩ ॥

ಇಂದ್ರಲೋಕ ಸೂರೆ ಮಾಡಿದ।ಮೂರು ಲೋಕಕೆ ಅಸುರ
ತನ್ನ ಭಯವ ತೋರಿದ । ಗರ್ಭಿಣಿ ಕಯಾದುವನ್ನು ಬ್ರಹ್ಮಪುತ್ರ
ಬಂದು ಆಗ । ದೈತ್ಯನಾದ ಹಿರಣ್ಯಕಶಿಪುವಿಗೆ ಒಪ್ಪಿಸಿದನು । ನಾರಸಿಂಹ॥೪॥

ನವಮಾಸಗಳು ತುಂಬಲು । ಕಯಾದು ಆಗ ಪುತ್ರರತ್ನವನ್ನು ಪಡೆದಳು ।
ನಾಮಕರಣವನ್ನು ಮಾಡಿ ವಿಪ್ರರನ್ನು ಕರೆಸಿ ಬೇಗ ।
ದೈತ್ಯ ತನ್ನ ಸುತಗೆ ಪ್ರಹ್ಲಾದನೆಂದು ಕರೆಸಿದನು । ನಾರಸಿಂಹ ॥ ೫ ॥

ಬಾಲಚಂದ್ರನಂತೆ ಹೊಳೆಯುತಾ ಇರುತಿರಲು ಐದು ವರ್ಷ
ತುಂಬಿತಾಗಲೆ । ಗುರುಗಳನ್ನು ಕರೆಸಿ ಬೇಗ ಸಕಲ ವಿದ್ಯೆ ಕಲಿಸಿರೆಂದು ।
ಗುರುಗಳಿಗೆ ಮಗನನ್ನು ಒಪ್ಪಿಸಿದ ದೈತ್ಯ ತಾನು । ನಾರಸಿಂಹ ॥ ೬ ॥

ಓಂ ನಮ: ಶಿವಾಯ ಎನುತಲಿ । ಅಸುರ ತನ್ನ ಸುತನ ಬರೆದು ತೋರು
ಎನ್ನಲು । ನರಹರಿಯ ನಾಮವನ್ನು ನಗುನಗುತಲೆ ಬರೆಯುತಿರಲು ।
ಎಡದ ತೊಡೆಯ ಮೇಲಿದ್ದ ಶಿಶುವ ಬಡಿದು ಧರೆಗೆ ನೂಕಿದನು॥ನಾರಸಿಂಹ ॥೭॥

ಸುತ್ತ ಜನರ ಕರೆಸಿ ಬೇಗದಿ । ಅಸುರ ತನ್ನ ಸುತನ ಕೊಲ್ಲಿಸಬೇಕು
ಎಂದಾಗ । ಅಟ್ಟ ಅಡವಿಯೊಳು ವಿಷವನಿಟ್ಟು ಭೋಜನಂಗಳ ಮಾಡಿ ।
ಹರಿಯ ಸ್ಮರಣೆ ಮಾತ್ರದಿಂದ ಭುಂಜಿ ತಿಳಿದ ಜಟ್ಟಿಹಾಂಗೆ ॥ ನಾರಸಿಂಹ ॥ ೮ ॥

ಅಂಬುಧಿಯೊಳು ಮಗನ ಮಲಗಿಸಿ। ಮೇಲೆ ದೊಡ್ಡ ಬೆಟ್ಟವನ್ನು ಇಟ್ಟು
ಬನ್ನಿರೋ । ಹರಿಯ ಕೃಪೆಗೆ ವಶನಾದ ತರಳನೆಂದು ವರುಣದೇವ ।
ಮರಣ ಇಲ್ಲದಹಾಂಗೆ ಮಾಡಿ ಮನೆಗೆ ಕೊಟ್ಟು ಕಳುಹಿದನು ॥ನಾರಸಿಂಹ ॥ ೯ ॥

ಬೆಟ್ಟದಿಂದ ಕಟ್ಟಿ ಉರುಳಿಸಿ । ಅಸುರ ತನ್ನ ಪಟ್ಟದಾನೆ ಕಾಲಲಿ ಮೆಟ್ಟಿಸಿ ।
ಹರಿವ ಒಲೆಯ ಮಾಡಿ ಸುಟ್ಟು ಹುಲಿಯ ಬೋನಿನಲ್ಲಿ ಇಟ್ಟು ।
ಯತ್ನವಿಲ್ಲದೆ ಸುತನ ಕೊಲ್ಲಲು ಶಕ್ತನಲ್ಲದೆ ಪೋದನಂತೆ ॥ ನಾರಸಿಂಹ ॥ ೧೦ ॥

ನಿನ್ನ ದೇವ ಇದ್ದ ಎಡೆಯನು। ತೋರು ಎನುತ ಪಿತನು ತನ್ನ ಸುತನ
ಕೋರಲು। ಎನ್ನ ದೇವ ಇಲ್ಲದಂತ ಎಡೆಗಳುಂಟೆ ಲೋಕದಲ್ಲಿ ।
ಕಂಭದಲ್ಲೂ ಇರುವನೆಂದು ಕೈಯ ಮುಗಿದು ತೋರ್ದನಾಗೆ ॥ ನಾರಸಿಂಹ॥೧೧॥

ವರಕಂಬವನ್ನು ಒದೆಯಲು । ನರಹರಿಯು ಉಗ್ರಕೋಪವನ್ನು ತಾಳಿದ ।
ಕಟಕಟೆಂಬ ಧ್ವನಿಯ ಮಾಡಿ ನಖಗಳಿಂದ ಪಿಡಿದು ಒತ್ತಿ ।
ಕರುಳ ಬಗೆದು ಮಾಲೆ ಹಾಕಿ ಕಂದ ಭಕ್ತನಪ್ಪಿಕೊಂಡ ॥ ನಾರಸಿಂಹ ॥ ೧೨ ॥

ಅಂತರಿಕ್ಷದಲ್ಲಿ ಅಮರರು । ನೋಡಿ ಆಗ ಪುಷ್ಪವೃಷ್ಟಿಯನ್ನೆ ಕರೆದರು ।
ಅಜನ ಪಡೆದ ದೇವಿ ಬಂದು ತೊಡೆಯ ಮೇಲೆ ಕುಳಿತಿರಲು ।
ಅಮರಪತಿಯರೆಲ್ಲರ ನೋಡಿ ಅಂಜಬೇಡೆಂದಭಯವಿತ್ತ ॥ ನಾರಸಿಂಹ ॥ ೧೩ ॥

ಲಕ್ಷ್ಮಿನಾರಸಿಂಹ ಚರಿತೆಯ । ಉದಯಕಾಲ ಪಠಿಸುವಂತ ನರರಿಗೆಲ್ಲಾ ।
ಪುತ್ರಸಂತಾನಂಗಳಿತ್ತು । ಮತ್ತೆ ಬೇಡಿದಹಾಂಗೆ ಕೊಟ್ಟು ।
ಭಕ್ತವತ್ಸಲ ಮುಕ್ತಿ ಕೊಡುವ । **ಪುರಂದರವಿಠ್ಠಲ**ರಾಯ ॥ ನಾರಸಿಂಹ ॥ ೧೪ ॥

ರಾಗ – ಕಾಂಬೋದಿ : ತಾಳ – ಝಂಪೆ ತಾಳ

ಪ್ರಹ್ಲಾದವರದ ಭಯ ಗಜಕೆ ಸಿಂಹ ಪರಮ
ಆಹ್ಲಾದ ಪದವಿತ್ತು ಪೊರೆಯೊ ನರಸಿಂಹ । ಪ ।

ಹಿಂದೆ ಹಿರಣ್ಯಕನಲ್ಲಿ ಜನಿಸಿದ ಪ್ರಹ್ಲಾದ
ನೊಂದವನ ಬಾಧೆಯಲಿ ಮರುಗಿ ಸೊರಗಿ
ಇಂದಿರೇಶ ಸಲಹೆನಲು ಗಾಢಸ್ತಂಭದಲೊದಗಿ
ಬಂದವನುದರ ಬಗೆದೆ ರುದಿರವನು ಸವಿದೆ । ೧ ।

ಅಸುರ ಕೆಡಲದಕಂಡು ಅತಿಹರುಷದಿಂದ
ತ್ರಿದಶಶಂಬರದಿ ಪೂಮಳೆಗರೆಯಲು

ಶಿಶುವೇಕ ಮಾನಸದಿ ಮೊರೆಹೊಕ್ಕು ಪೊಗಳುತಿರೆ
ಬಿಸಜಾಕ್ಷನ ಕರುಣದಿಂದ ಸಲಹಿದೆಯಾಗಿ ।೨ ।

ಹಲವು ಯೋನಿಗಳಲ್ಲಿ ತಿರುಗಿ ಬಳಲಿದೆನಯ್ಯ
ನಳಿನಾಕ್ಷ ನಿಮ್ಮ ಗುರುತವ ಕಾಣದೆ
ಇಳೆಯಲ್ಲಿ ದ್ವಿಜನಾಗಿ ಪುಟ್ಟಿ ತವ ಪದಪಿಡಿದೆ
ಗೆಲಿಸು ಭವದುರಿತ ಪ್ರಸನ್ವೆಂಕಟ ನೃಸಿಂಹ । ೩ ।

## ನರಸಿಂಹನ ಪಾದ

ನರಸಿಂಹನ ಪಾದ । ಭಜನೆಯ ಮಾಡೋ ।
ನರಸಿಂಹನ ಪಾದ ।ಭಜನೆಯ ಮಾಡಲು ।
ದುರಿತ ಪರ್ವತವ ।ಖಂಡಿಸುವ ಕುಲಿಶದಂತೆ ॥ ಅ.ಪ ॥
ತರಳನ ಮೊರೆಕೇಳಿ । ತ್ವರಿತದಿಂದಲಿ ಬಂದು ।
ದುರುಳನ ಕರುಳ ತನ್ನ । ಕೊರಳಲಿ ಧರಿಸಿದ ॥ ೧ ॥
ಸುರರೆಲ್ಲ ನಡುಗಲು । ಸಿರಿದೇವಿ ಮೊರೆಯಿಡೆ ।
ವರಕಂಭದಿಂದ ಬಂದ । ವೈಕುಂಠಪತಿ ನಮ್ಮ ॥ ೨ ॥
ಹರವಿರಿಂಚಾದ್ಯರು । ಕರವೆತ್ತಿ ಮುಗಿಯಲು ।
ಪರಮಶಾಂತನಾದ । ಪುರಂದರವಿಠಲ ॥ ೩ ॥

## ಭಳಿರೆ ಭಳಿರೆ ನಾರಸಿಂಹ

ಭಳಿರೆ ಭಳಿರೆ ನಾರಸಿಂಹ ಮಹಾಸಿಂಹ
ಮಲಮಲಾ ಮಲತವರ ವೈರಿ ಉರಿ ಮಾರೀ । ಪ ॥

ನಗ ನಗಾ ನಗಗಳಲ್ಲಾಡೆ ಚತುರ್ದಶ

ಜಗಜಗಾ ಜಗವೆಲ್ಲ ಕಂಪಿಸಿ ಕೆಂಪಾಗೆ
ಹಗೆ ಹಗೇ ಹಗೆ ಬಲವ ದೆಸೆಗೆಡೆಸಿ ರೋಷಕಿಡಿ
ಉಗು ಉಗು ಉಗುಳುತ್ತ ಬಂದ ನರಸಿಂಹ ॥ ೧ ॥

ಬಿಗಿ ಬಿಗಿ ಬಿಗಿದೂ ಹುಬ್ಬು ಗಂಟನೆ ಹಾಕಿ
ಹೊಗೆ ಹೊಗೆ ಹೊಗೆಸುತ್ತಿ ಸರ್ವರಂಜೆ
ನೆಗೆ ನೆಗೆ ನೆಗೆ ನೆಗೆದು ಕುಪ್ಪಳಿಸಿ ಅಸುರನ್ನ
ಮಗು ಮಗು ಮಗು ಬೇಡಿಕೊಂಡ ನರಸಿಂಹ ॥ ೨ ॥

ಉಗು ಉಗು ಉಗುರಿಂದ ಕ್ರೂರನ್ನ ಹೇರೊಡಲ
ಬಗೆ ಬಗೆ ಬಗೆ ಬಗೆದು ರಕುತವನ್ನೂ
ಉಗಿ ಉಗಿ ಉಗಿ ಉಗಿದು ಚೆಲ್ಲಿ ಕೊರಳಿಗೆ ಕರುಳ
ತೆಗೆ ತೆಗೆ ತೆಗೆ ತೆಗೆದು ಇಟ್ಟ ನರಸಿಂಹ ॥ ೩ ॥

ಝುಗ ಝುಗ ಝುಗದೊಳಗೆ ಪ್ರಣತಾರ್ತಿಹರನೆಂದು
ಝುಗ ಝುಗ ಝುಗ ಝುಗಿಪ ಮುಕುಟ ತೊಗೆ
ನಗು ನಗು ನಗು ನಗುತ ಸುರರು ಗಗನದಿ ನೆರೆದು
ಮಿಗಿ ಮಿಗಿ ಮಿಗಿ ಮಿಗಿಲೆನೆ ನಾರಸಿಂಹ ॥ ೪ ॥

ಒಂದೊಂದೊಂದೊಂದು ಮುನಿಗಳಿಗೆ ಒಲಿದು
ಅಂದಂದಂದಂದಗಾಯುತ ಒಲಿದು
ಅಂದಂದವಕಾಶ ಚೋಳಂಗಿರೀ
ಮಂದಿರನೆ ವಿಜಯ ವಿಠಲ ನಾರಸಿಂಹ ॥ ೫ ॥

## ಬಂದ ಸಿಂಹ ನಾರಸಿಂಹ

ಬಂದ ಸಿಂಹ ನಾರಸಿಂಹ ಬಂದ ನೋಡೇ
ಇಂದಿರೇಶ ಕಂಬ ಒಡೆದು ಬಂದ ನೋಡೇ
ಅಕೋ ಬಂದ ನೋಡೇ । ಇಕೋ ಬಂದ ನೋಡೇ ॥

ಎಲ್ಲಿ ನೋಡಿದರಲ್ಲಿ ನಾರಸಿಂಹ ನೋಡೇ
ಎಲ್ಲರಲ್ಲಿ ಮೇಲೆ ಎಂಬ ಚೆಲುವ ನೋಡೇ
ಎಲ್ಲರನ್ನು ಹರಿಗೆ ಎಂದು ದಾನ ಮಾಡೇ ॥ ೧ ॥

ಹರಿಯು ಕಂದನ ಕರೆಗೆ ಓಡಿ ಬಂದ ನೋಡೇ
ಧರಿಸಲಿಲ್ಲ ಪೂರ್ಣ ಸಿಂಹ ವೇಷ ನೋಡೇ ॥ ೨ ॥
ಹರಿಯ ಪಾದಕೆ ನಮಿಸಿದಂದದಿ ಭಿಕ್ಷೆ ನೋಡೇ
ಚರಣ ಸುಧೆಯ ಕಮಲನೀತ ಚಂದ್ರ ನೋಡೇ ॥ ೩ ॥
ಭಕ್ತವತ್ಸಲ ಪುರಂದರವಿಠಲ ಬಂದ ನೋಡೇ ।
ಮುಕ್ತಿ ಕೊಡುವ ದಾತ ಮನೆಗೆ ಬಂದ ನೋಡೇ ॥ ೪ ॥

## ಸಿಂಹರೂಪನಾದ ಶ್ರೀಹರಿ

ಸಿಂಹರೂಪನಾದ ಶ್ರೀಹರಿ ನಾಮಗಿರೀಶನು ॥ ಪ ॥
ಒಮ್ಮನದಿಂದ ನಿಮ್ಮನು ಭಜಿಸಲು
ಸಮ್ಮತಿಯಿಂದಲಿ ಕಾಯ್ವೆನೆಂಬ ಶ್ರೀಹರಿ ॥ ಅ.ಪ ॥
ತರುಳನು ಕರೆಯೆ ಸ್ತಂಭವು ಬಿರಿಯೆ
ತುಂಬು ಉಗ್ರವ ತೋರಿದನು
ಕರುಳನು ಬಗೆದು ಕೊರಳೊಳಗಿಟ್ಟು
ತರುಳನ ಸಲುಹಿದ ಶ್ರೀನರಸಿಂಹನು ॥ ೧ ॥

ಭಕ್ತರೆಲ್ಲ ಕೂಡು ಬಹುವಾರ ಪಾಡಿ
ಪರಮ ಶಾಂತವನು ಬೇಡಿದರು
ಕರೆತಂದು ಸಿರಿಯಾ ತೊಡೆಯೊಳು ಕುಳಿಸಲು
ಪರಮ ಹರುಷವನು ಹೊಂದಿದ ಶ್ರೀಹರಿ ॥ ೨ ॥
ಜಯ ಜಯ ಜಯವೆಂದು ಹೂವನು ತಂದು
ಹರಿ ಹರಿ ಹರಿ ಎಂದು ಸುರರೆಲ್ಲ ಸ್ತುತಿಸೆ
ಭಯ ನಿವಾರಣಾ ಭಾಗ್ಯ ಸ್ವರೂಪನು
ಪರಮಪುರುಷ ಶ್ರೀಪುರಂದರವಿಠಲನು ॥ ೩ ॥

## ನಂಬಿದೆ ನಿನ್ನ ಪಾದ ನರಸಿಂಹ

ನಂಬಿದೆ ನಿನ್ನ ಪಾದ ನರಸಿಂಹ ।
ಎನ್ನ ಬೆಂಬಿಡದೆ ಸಲಹಯ್ಯ ನರಸಿಂಹ ॥
ಹಂಬಲಿಸುವೆನು ಬಲು ನರಸಿಂಹ ।
ಪಾದ ನಂಬಿದವರನು ಕಾಯೋ ನರಸಿಂಹ ॥
ತುಂಬುರು ನಾರದಪ್ರಿಯ ನರಸಿಂಹ ।
ಚೆಲ್ವ ಶಂಬರಾರಿಯ ಪಿತನೆ ನರಸಿಂಹ ॥
ಅಂಬರೀಶನ ಕಾಯ್ದ ನರಸಿಂಹ ।
ಜಗದಂಬಾರಮಣನೆ ಸಿರಿ ನರಸಿಂಹ ॥
ಬಾಲ ಕರೆದಲ್ಲಿ ಬಂದೆ ನರಸಿಂಹ ।
ಭಕ್ತಪಾಲಿಪ ದಯಾಳು ಸಿರಿ ನರಸಿಂಹ ॥
ಲೀಲೆಯಿಂದ ಹಿರಣ್ಯನ ನರಸಿಂಹ ।
ಕೊಂದ ಲೋಲ ಸಿರಿಯರಸನೆ ನರಸಿಂಹ ॥
ಅಚ್ಯುತಾನಂತ ಗೋವಿಂದ ನರಸಿಂಹ ।
ಸಿರಿಸಚ್ಚಿದಾನಂದ ಮುಕುಂದ ನರಸಿಂಹ ॥

ಕಿಚ್ಚಿನಂದದಿ ಬಂದೆ ನರಸಿಂಹ ।
ಭವ ವಿಚ್ಚೆಯಿಂದ ಬಿಡಿಸಯ್ಯ ನರಸಿಂಹ ॥
ಕರಿಮೊರೆಯನು ಕೇಳಿ ನರಸಿಂಹ ।
ಬಲು ಬರದಿಂದೊದಗಿ ಬಂದೆ ನರಸಿಂಹ ॥
ಗರುಡವಾಹನನಾಗಿ ನರಸಿಂಹ ।
ಉದ್ಧರಿಸಿ ಕಾಯ್ದಿನಲ್ಲೋ ನರಸಿಂಹ ॥
ದೇವರ ದೇವನು ನೀನು ನರಸಿಂಹ ।
ಬೇರೆ ಕಾವರನು ಕಾಣೆನಯ್ಯ ನರಸಿಂಹ ॥
ಭಾವಜನಯ್ಯನೆ ಸಿರಿ ನರಸಿಂಹ ।
ನಿನ್ನ ಸೇವೆಯ ಪಾಲಿಸಿ ಕಾಯೋ ನರಸಿಂಹ ॥
ತಂದೆ ತಾಯಿ ಗುರು ದೈವ ನರಸಿಂಹ ।
ಎನ್ನ ಬಂಧುಬಳಗವು ನೀನೆ ನರಸಿಂಹ ॥
ಕುಂದು ಹೆಚ್ಚು ನೋಡಬೇಡ ನರಸಿಂಹ ।
ಪುರಂದರವಿಠಲ ಕಾಯೋ ನರಸಿಂಹ ॥

## ಬಾರಯ್ಯ ದಯಮಾಡಿ

ಬಾರಯ್ಯ ದಯಮಾಡಿ ತ್ವರಿತದಿಂ ಬೇಗ ।
ಬಾರಯ್ಯ ದಯಮಾಡಿ ತ್ವರಿತದಿಂ ಬೇಗ ॥ ಪ ॥
ಬೆದರಲು ಕರಿರಾಜ ಒದಗಿ ಬಂದೆ ಅಲ್ಲಿ ।
ಮದ ಭಯ ಭಾಗ್ಯವು ಒದಗಿದುಬ್ಬಸದಿಂದ। 1 ।
ಸ್ತಂಭದಿ ನರಹರಿ ಎಂಬ ಭಾವದಿ ಬಂದು ।
ಕುಂಭಿಣಿ ಪತಿ ಬಹು ಸಂಭ್ರಮಗೊಳುತಲಿ । 2 ।
ನರನು ಅರ್ಚಕನೆತ್ತ ನರಹರಿ ನೀನೆತ್ತ ।
ಕರುಣದಿ ಬರಬೇಕು ಸಿರಿ ಹಯವದನ ॥ 3 ।

## ಕಂಡೆ ನಾ ಉದ್ದಂಡ ನರಸಿಂಹನಾ

ಕಂಡೆ ನಾ ತಂಡ ತಂಡದ ಹಿಂಡು ಹಿಂಡು ದೈವ ಪ್ರಚಂಡ
ರಿಪುಗಂಡ ಉದ್ದಂಡ ನರಸಿಂಹನ ಕಂಡೆನಯ್ಯ ॥ ಪ ॥

ಗುಡುಗುಡಿಸಿ ಕಂಬದಲಿ ಧಡಧಡ ಸಿಡಿಲು ಸಿಡಿಯೆ ।
ಕಿಡಿಕಿಡಿಸಿ ಸೆನುಡಿಯ ಡಗಲೊಡನೆ ಮುಡಿ ಪಿಡಿದು ।
ಘಡ ಘಡನೆ ನಡು ನಡುಗೆ ಗುಡುಗುಡಿಸಿ ಸಭೆ ಬೆದರೆ ।

ಹಿಡಿ ಹಿಡಿದು ಹಿರಣ್ಯಕನ ತೊಡೆಯೊಳಿಡೆ ಕೆಡಹಿದನೆ
ಉರದೊಳಪ್ಪಳಿಸಿ ಅರಿಬಸಿರ ಸರಸ ಸೀಳಿ ।
ಪರಿಪರಿಯಲಿ ಚರ್ಮವೆಳೆದೆಳೆಯಲು ।
ನರ ನರತನೆ ನೆಗೆದು ನಿರ್ಗಳಿತ ಶೋಣಿತ ಸುರಿಯೆ ॥

ಹರಿ ಹರಿದು ಕರುಳ ಕೊರಳೊಳಿಟ್ಟವನ ।
ಪುರಜನರು ಹಾಯೆಂದು ಸುರರು ಹೂ ಮಳೆಗರೆಯೆ ।
ಹರಿ ಹರಿ ಶರಣೆಂದು ಸ್ತುತಿಸಿ ಶಿಶು ಮೆರೆಯೆ ।
ಕರುಣಾಳು ಕಾಗಿನೆಲೆ ಆದಿಕೇಶವನ ॥

## ಮಹದಾದಿ ದೇವ ನಮೋ

ಮಹದಾದಿ ದೇವ ನಮೋ ॥ ಮಹದಾದಿ ದೇವ ನಮೋ ॥ ಪ ॥
ಮಹಮಾಹಿಮನೆ ನಮೋ ।ಪ್ರಹ್ಲಾದವರದ ಅಹೋಬಲ ನಾರಸಿಂಹ॥ಅ॥

ಧರಣಿಗುಬ್ಬಸವಾಗೆ ತಾರಾಪಥವು ನಡುಗೆ ।
ಸುರರು ಕಂಗೆಟ್ಟೋಡೆ ನಭವ ಬಿಟ್ಟು ।

ತರುಗಿರಿಗಳಲ್ಲಾಡೆ ಶರಧಿಗಳು ಕುದಿದುಕ್ಕೆ ।
ಉರಿಯನುಗುಳುತ ಉದ್ಭವಿಸಿದೆ ನಾರಸಿಂಹ । 1 ।

ಸಿಡಿಲಂತೆ ಗರ್ಜಿಸುತ ಕುಡಿಯನಾಲಗೆ ಚಾಚಿ ।
ಅಡಿಗಡಿಗೆ ಲಂಘಿಸುತ ಕಡುಕೋಪದಿಂದ ।
ಮುಡಿಪಿಡಿದು ರಕ್ಕಸನ ಕೆಡಹಿ ನಖದಿಂದೊತ್ತಿ ।
ಕಡು ಉದರ ಬಗೆದೆ ಕಡುಗಲಿ ನಾರಸಿಂಹ ॥ 2 ॥

ಸರಸಿಜೋದ್ಭವ ಹರ ಪುರಂದರಾದಿ ಸಮಸ್ತ ।
ಸುರರು ಅಂಬರದಿ ಹೂಮಳೆಯ ಕರೆಯೆ ।
ಸಿರಿಸಹಿತ ಗರುಡಾದ್ರಿಯಲಿ ನಿಂತು ಭಜಕರ ।
ಕರುಣಿಸಿದೆ ಪುರಂದರವಿಠಲ ನಾರಸಿಂಹ ॥ 3 ॥

## ದಾನವನ ಕೊಂದದಲ್ಲಿ ಕಾಣಿರೋ

ರಾಗ – ಧನ್ಯಾಸಿ ಆದಿತಾಳ
ದಾನವನ ಕೊಂದದ್ದಲ್ಲಿ ಕಾಣಿರೋ । ಪ ।
ಗಾನ ವಿನೋದಿ ನಮ್ಮ ತೊರವೆಯ ನರಸಿಂಹ । ಅ.ಪ।
ಅಚ್ಚಪುರುಶನೆಂಬ ಸ್ವಚ್ಚರತ್ನ ಒಡಲೊಳು
ಬಿಚ್ಚಿ ಬೆದಕಿ ನೋಡಿದರೆ ಇನ್ನೆಷ್ಟು ಇದ್ದಾವೋ, ಎಂದು । 1 ।
ನೆಂಟತನವು ಬೆಳೆಯುಬೇಕೆಂದು ಕರುಳ ಕೊರಳೊಳು
ಗಂಟು ಹಾಕಿಕೊಂಡನೆಷ್ಟೋ ದೇಹ ಸಂಬಂಧದಿಂದ । 2 ।
ತೊರವೆಯ ನಾರಸಿಂಹ ಪ್ರಹ್ಲಾದ ಪಾಲಕ
ಉರಿಮೊರೆ ದೈವ ನಮ್ಮಪುರಂದರವಿಠಲ । 3 ।

## ನರಸಿಂಹಮಂತ್ರವೊಂದಿರಲು ಸಾಕು

ರಾಗ – ಬಿಲಹರಿ ತಾಳ – ಆಟತಾಳ

ನರಸಿಂಹ ಮಂತ್ರವೊಂದಿರಲು ಸಾಕು । ಪ ।
ದುರಿತ ಕೋಟಿಗಳ ಸಂಹರಿಸಿ ಭಾಗ್ಯವನೀವ । ಅ.ಪ।

ಹಸುಳೆ ಪ್ರಹ್ಲಾದನ ತಲೆಗಾಯ್ದುದೀ ಮಂತ್ರ ।
ಅಸುರನೊಡಲ ಬಗೆದ ದಿವ್ಯ ಮಂತ್ರ ।
ವಸುಧೆಯೊಳು ದಾನವರ ಅಸುವ ಸೆಳೆವ ಮಂತ್ರ ।
ಪಶುಪತಿಗೆ ಪ್ರಿಯವಾದ ಮೂಲಮಂತ್ರ ॥ 1 ॥

ದಿಟ್ಟ ಧ್ರುವರಾಯಗೆ ಪಟ್ಟಗಟ್ಟಿದ ಮಂತ್ರ ।
ಸೃಷ್ಟಿಯೊಳು ವಿಭೀಷಣನ ಪೊರೆದ ಮಂತ್ರ ।
ತುಟ್ಟತುದಿಯೊಳು ಅಜಾಮಿಳನ ಸಲಹಿದ ಮಂತ್ರ ।
ಮುಟ್ಟಿ ಭಜಿಪರಿಗಿದು ಮೋಕ್ಷಮಂತ್ರ ॥ 2 ॥
ಹಿಂಡುಭೂತವ ಕಡಿದು ತುಂಡು ಮಾಡುವ ಮಂತ್ರ ।
ಕೊಂಡಾಡೊ ಲೋಕಕುದ್ದಂಡ ಮಂತ್ರ ।
ಗಂಡುಗಲಿ ಪ್ರಚಂಡ ಹಿಂಡು ದಾನವರುಗಳ ।
ಗಂಡ ಪುರಂದರವಿಠಲನ ಮಹಾಮಂತ್ರ ॥ 3 ॥

## ಇದು ಏನಂಗ ಮೋಹನಾಂಗ

ರಾಗ – ದರ್ಬಾರು ಆಟ್ಟತಾಳ

ಇದು ಏನಂಗಮೋಹನಾಂಗ । ಪ ।
ಮದನಜನಕ ತೊರವೆಯ ನರಸಿಂಗ । ಅ ।

ಸುರರು ನುತಿಸಿದರೆ ತುಟಿಯ ಮಿಸಕದವ ।
ಮರೆದೇತಕೆ ಬಾಯ ತೆರೆದೆ ಪೇಳೊಮ್ಮೆ । 1 ।
ವರ ನೀಲ ಮುತ್ತು ಮಾಣಿಕ ಹಾರಗಳಿರೆ ।
ಕೊರಳಲಿ ಕರುಳಮಾಲೆಯನ್ನಿಟ್ಟು ಮೆರೆವುದು ॥ 2 ॥
ತೊರವೆಯ ನರಹರಿ ಪುರಂದರ ವಿಠಲ ।
ಸಿರಿಯಿಪ್ಪ ತೊಡೆಯೊಳು ಅರಿಯನಿಟ್ಟಿರುವುದು ॥ 3 ॥

**ಕರವ ಮುಗಿವೆ ಕರುಣಿಸು**

ಬಾಯಿ ತೆರೆದ ಬಗೆಯೇನು ದೇವರ ದೇವ ॥ ಪ ॥
ತೋಯದಳ ನೇತ್ರನೆ ॥ ಅ ॥
ಅಸುರನ ಉದರವ ಹಸನಾಗಿ ಬಗೆವಾಗ
ಹಸಿದು ಬಾಯಿ ತೆರೆದೆಯೋ
ಬಿಸಜಾಕ್ಷ ಭೂಮಂಡಲವು
ಬಸಿರೆಳಿದ್ದ ಉಬ್ಬಸಿಗೆ ಬಾಯಿ ತೆರೆದೆಯೋ ॥ 1 ॥
ಮಡದಿಯ ರೂಪಕ್ಕೆ ಮರುಳಾಗಿ ಅದರಿಂದ
ಬಡನೆ ಬಾಯಿ ತೆರೆದೆಯೋ
ಧೃಡದಿ ಪ್ರಹ್ಲಾದನು ಒಡೆಯ ರಕ್ಷಿಸು ಎಂಬೋ
ನುಡಿಗೆ ಬಾಯಿ ತೆರೆದೆಯೋ ॥ 2 ॥
ಗುರುಸತ್ಯಭೋಧರಾಯರ ನಿತ್ಯಭಜನೆಗೆ
ಬೆರೆತು ಬಾಯಿ ತೆರೆದೆಯೋ
ವರ ಕದರಮಂಡಲಗಿ ಹನುಮಯ್ಯನ ಒಡೆಯನೆ
ಕರವ ಮುಗಿವೆ ಬಾಯಿ ಮುಚ್ಚಿ ಕರುಣಿಸು ॥ 3 ॥

Visit : [www.sumadhwaseva.com](http://www.sumadhwaseva.com)